ಸಭ್ಯ ವಸ್ತ್ರಧಾರಣೆ ಹಾಗೂ ನಡವಳಿಕೆಗೆ ಇಸ್ಲಾಮಿನ ನೀತಿನಿಯಮಗಳು ಇತರ ಕೆಲವು ನಾಗರಿಕತೆಗಳಲ್ಲಿ ಕಂಡುಬರಬಹುದಾದರೂ ಇಸ್ಲಾಮ್ ಆದೇಶಿಸುವ ವಸ್ತ್ರಧಾರಣೆಯು ಅದ್ವಿತೀಯವೂ ಸುಶೀಲತೆ, ಸದಾಚಾರ ಮತ್ತು ನೈತಿಕ ಮಟ್ಟಗಳಲ್ಲಿ ಉನ್ನತ ಸ್ಥಾನಕ್ಕೆ ಏರಿಸುವಂತದ್ದೂ ಆಗಿದೆ. ನೈಸರ್ಗಿಕ ಪ್ರಲೋಭನೆಯೆಡೆಗೆ ಕೊಂಡೊಯ್ಯುವ ಅಪಾಯಕಾರಿ ಸನ್ನಿವೇಶಗಳಾದ ಪುರುಷರ ಮುಕ್ತ ಬೆರೆಯುವಿಕೆಯಿಂದ ಇಸ್ಲಾಮ್ ವ್ಯಕ್ತಿ ಮತ್ತು ಸಮಾಜವನ್ನು ರಕ್ಷಿಸುತ್ತದೆ.

ಅಬ್ದುರ್ರಹ್ಮಾನ್ ಅಶ್ಶೀಹ

ವಿಶೇಷವಾಗಿ ಫ್ರಾನ್ಸ್, ತುರ್ಕಿ ಮೊದಲಾದ ಜಾತ್ಯಾತೀತ ದೇಶಗಳಲ್ಲಿ ಈ ವಿಷಯವನ್ನು ಮಾಧ್ಯಮಗಳಲ್ಲಿ ಭಾವೋದ್ರೇಕಗೊಳಿಸಲಾಗುತ್ತಿದೆ. ಸಾರ್ವಜನಿಕ ಸ್ಥಳಗಳಲ್ಲಿ ಇಸ್ಲಾಮೀ ಶಿರವಸ್ತ್ರವನ್ನು ಧರಿಸುವುದು ಕಾನೂನುಬಾಹಿರವೆಂದು ಘೋಷಿಸಲಾಗುತ್ತಿದೆ. ಈ ವಿಷಯದ ಆಳಕ್ಕೆ ಇಳಿಯಲು ನಾವು ಇಚ್ಛಿಸುವುದಿಲ್ಲ. ಈಗಾಗಲೇ ಹೇಳಲಾದ ಮಾಹಿತಿಗಳಿಂದ ಮತ್ತು ಮುಂದೆ ಹೇಳಲಾಗುವ ಕೆಲವು ಮಾಹಿತಿಗಳಿಂದ ಈ ವಿಷಯವನ್ನು ಅಂದರೆ ಇಸ್ಲಾಮೀ ಆಧಾರಪ್ರಮಾಣಗಳಲ್ಲಿ ಆಜ್ಞಾಪಿಸಲಾಗಿರುವಂತೆ ಸಭ್ಯವಾಗಿ ವಸ್ತ್ರ ತೊಡುವುದು ಮತ್ತು ಶರೀರ ಸೌಂದರ್ಯವನ್ನು ಪ್ರದರ್ಶಿಸದಿರುವುದು ಹೆಣ್ಣಿನ ಗೌರವ ಸಂರಕ್ಷಣೆಗಾಗಿ ಹೌದೋ ಅಲ್ಲವೋ ಎಂಬುದನ್ನು ಓದುಗರೇ ಸ್ವಯಂ ನಿರ್ಧರಿಸಬೇಕೆಂದು ವಿನಂತಿಸುತ್ತಿದ್ದೇವೆ.

ಅಲ್ಲಾಹನು ಹೇಳುತ್ತಾನೆ: “ಓ ಪ್ರವಾದಿಯವರೆ! ತಮ್ಮ ಪತ್ನಿಯರೊಂದಿಗೆ, ಪುತ್ರಿಯರೊಂದಿಗೆ ಮತ್ತುಸತ್ಯವಿಶ್ವಾಸಿನಿ ಸ್ತ್ರೀಯರೊಂದಿಗೆ ಅವರು ತಮ್ಮ ಜಲಾಬೀಬನ್ನು (ಶರೀರವನ್ನು ಸಂಪೂರ್ಣವಾಗಿ ಮುಚ್ಚುವ ಉಡುಪು) ತಮ್ಮ ಶರೀರದ ಮೇಲೆ ಎಳೆದುಕೊಳ್ಳುವಂತೆ ಹೇಳಿರಿ. ಅವರು ಗುರುತಿಸಲ್ಪಡಲು ಮತ್ತು ಸತಾಯಿಸಲ್ಪಡದಿರಲು ಅದು ಅತ್ಯುತ್ತಮವಾಗಿದೆ. ಅಲ್ಲಾಹು ಅತ್ಯಧಿ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು.” [ಕುರ್‌ಆನ್ 33:59]

ಈ ಸೂಕ್ತಿಯು ಸ್ಪಷ್ಟವಾಗಿ ಹೇಳುವ ಪ್ರಕಾರ ಮಹಿಳೆಯು ಹಿಜಾಬ್ ಧರಿಸಬೇಕೆಂದು ಕಡ್ಡಾಯಗೊಳಿಸಿರುವುದರ ಕಾರಣವು ಆಕೆಯನ್ನು ಇತರ ಮಹಿಳೆಯರಿಂದ ಬೇರ್ಪಡಿಸಿ ಒಬ್ಬ ಗೌರವಾನ್ವಿತ ಮುಸ್ಲಿಮ್ ಮಹಿಳೆಯೆಂದು ಗುರುತಿಸಲ್ಪಡುವುದಕ್ಕಾಗಿ ಮತ್ತು ಅನ್ಯ ಪುರುಷರ ಕಾಮ ದೃಷ್ಟಿಗಳಿಂದ ಆಕೆಯನ್ನು ರಕ್ಷಿಸುವುದಕ್ಕಾಗಿದೆ. ನಮಗೆಲ್ಲ ತಿಳಿದಿರುವಂತೆ ಉದ್ರೇಕಕಾರಿ ವಸ್ತ್ರಧಾರಣೆಯು ಆಕೆಯನ್ನು ಪೀಡಿಸುವಂತೆ ಮತ್ತು ಕಿರುಕುಳ ಕೊಡುವಂತೆ ಪುರುಷರನ್ನು ಪ್ರಚೋದಿಸುತ್ತದೆ. ಇಂತಹ ವಸ್ತ್ರಧಾರಣೆಯನ್ನು ಕೆಲವು ಸಮಾಜಗಳು ಪ್ರೋತ್ಸಾಹಿಸಬಹುದು, ಆದರೆ ಗೌರವಾನ್ವಿತ ಮುಸ್ಲಿಮರಿಗೆ ಅದು ಸಾಧ್ಯವಿಲ್ಲ.

ಮಹಿಳೆಯರನ್ನು ಮಿತಿಮೀರಿದ ಪ್ರಲೋಭನೆಗಳಿಂದ ರಕ್ಷಿಸುವುದಕ್ಕಾಗಿ ಇಸ್ಲಾಮೀ ಕಾನೂನಿನಲ್ಲಿ ವಿವರಿಸಿರುವ ಎಲ್ಲ ಸಂರಕ್ಷಣಾತ್ಮಕ ಕ್ರಮಗಳನ್ನೂ ಕೈಗೊಳ್ಳ ಬೇಕಾಗಿದೆ. ಅವುಗಳಲ್ಲಿ ಕೆಲವು ಮಹಿಳೆಯರ ವೇಷಭೂಷಣಗಳಿಗೆ ಸಂಬಂಧಿಸಿದ್ದಾಗಿದೆ. ಅಂದರೆ ಸಡಿಲವಾದ ಮತ್ತು ಶರೀರವನ್ನು ಸಂಪೂರ್ಣವಾಗಿ ಮುಚ್ಚುವ ಉಡುಪುಗಳು, ಶಿರವಸ್ತ್ರ ಮತ್ತು ಕುರ್‌ಆನ್ ಹಾಗೂ ಸುನ್ನತ್ತಿನ ವಿಶ್ವಾಸಾರ್ಹ ವ್ಯಾಖ್ಯಾನಗಳಲ್ಲಿ ಹೇಳಲಾಗಿರುವಂತೆ ಮುಖವಸ್ತ್ರ ಇತ್ಯಾದಿಗಳನ್ನು ಧರಿಸುವುದಾಗಿದೆ.

ಅಲ್ಲಾಹನು ಹೇಳುತ್ತಾನೆ: "ಸತ್ಯವಿಶ್ವಾಸಿನಿಯರೊಂದಿಗೆ ಅವರುತಮ್ಮ ದೃಷ್ಟಿಗಳನ್ನು ತಗ್ಗಿಸುವಂತೆ ಮತ್ತು ತಮ್ಮ ಗುಪ್ತಾಂಗಗಳನ್ನು ಕಾಪಾಡಿಕೊಳ್ಳುವಂತೆ ಹೇಳಿರಿ. ತಮ್ಮ ಸೌಂದರ್ಯದಿಂದ ಪ್ರಕಟವಾಗುವುದರ ಹೊರತು ಬೇರಾವುದನ್ನೂ ಅವರು ಪ್ರದರ್ಶಿಸದಿರಲಿ. ಅವರು ತಮ್ಮ ಶಿರವಸ್ತ್ರಗಳನ್ನು ತಮ್ಮ ಎದೆಗಳ ಮೇಲೆ ಎಳೆದುಕೊಳ್ಳಲಿ. ತಮ್ಮ ಪತಿಯಂದಿರು, ತಮ್ಮ ತಂದೆಯಂದಿರು, ತಮ್ಮ ಪತಿಯ ತಂದೆಯಂದಿರು, ತಮ್ಮ ಪುತ್ರರು, ತಮ್ಮ ಪತಿಯ ಪುತ್ರರು, ತಮ್ಮ ಸಹೋದರರು, ತಮ್ಮ ಸಹೋದರ ಪುತ್ರರು, ತಮ್ಮ ಸಹೋದರಿ ಪುತ್ರರು, ಮುಸ್ಲಿಮ್ ಸ್ತ್ರೀಯರು, ತಮ್ಮ ಬಲಗೈಗಳು ಒಡೆತನದಲ್ಲಿಟ್ಟುಕೊಂಡವರು (ಗುಲಾಮರು), ಲೈಂಗಿಕಾಸಕ್ತಿಯಿಲ್ಲದ ಪುರುಷ ಸೇವಕರು, ಸ್ತ್ರೀಯರ ಆಂತರ್ಯಗಳನ್ನು ಅರಿತಿರದ ಮಕ್ಕಳು ಮುಂತಾದವರ ಹೊರತು ಇನ್ನಾರಿಗೂ ತಮ್ಮ ಸೌಂದರ್ಯವನ್ನು ಅವರು ಪ್ರದರ್ಶಿಸದಿರಲಿ. ತಾವು ಮರೆಮಾಚುವ ತಮ್ಮ ಸೌಂದರ್ಯವನ್ನು ಬಯಲು ಮಾಡುವ ಸಲುವಾಗಿ ಕಾಲನ್ನು ನೆಲಕ್ಕೆ ಬಡಿದು ನಡೆಯದಿರಲಿ. ಓ ಸತ್ಯವಿಶ್ವಾಸಿಗಳೇ!

ನೀವೆಲ್ಲರೂ ಅಲ್ಲಾಹುವಿನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ನೀವು ಯಶಸ್ಸು ಗಳಿಸಲೂಬಹುದು."[ಕುರ್‌ಆನ್ 24:31]

ಈ ಸೂಕ್ತಿಯು 'ಮಹ್ರಮ್'ಎಂದು ವಿಭಾಗಿಸಲಾಗಿರುವ ಪುರುಷರ ಬಗ್ಗೆ ಸೂಚಿಸುತ್ತದೆ. ಅದೇ ರೀತಿ ಪುರುಷರು ಮತ್ತು ಸ್ತ್ರೀಯರು ತಮ್ಮ ದೃಷ್ಟಿಗಳನ್ನು ತಗ್ಗಿಸಬೇಕೆಂದು ಹೇಳುತ್ತದೆ. ದೃಷ್ಟಿಗಳನ್ನು ತಗ್ಗಿಸುವುದು ವಿರುದ್ಧ ಲಿಂಗಿಗಳನ್ನು ನೈಸರ್ಗಿಕ ಪಲೋಭನೆಗಳಿಂದ ಮತ್ತು ಪರಸ್ಪರ ಆಕರ್ಷಣೆ ಗೊಳಗಾಗುವುದರಿಂದ ರಕ್ಷಿಸುವ ಅತ್ಯುತ್ತಮ ವಿಧಾನವಾಗಿದೆ.

ಇಸ್ಲಾಮೀ ಪೂರ್ವ ಕಾಲಘಟ್ಟದ ಮಹಿಳೆಯರ ಉದ್ರೇಕಕಾರಿ ವರ್ತನೆಗಳ ಬಗ್ಗೆ ಸೂಚನೆ ನೀಡುತ್ತಾ, ಮತ್ತು ವಿಶ್ವಾಸಿಗಳನ್ನು ಸೂಕ್ತ ನಡವಳಿಕೆ ಹಾಗೂ ಪಶ್ಚಾತ್ತಾಪದೆಡೆಗೆ ಕರೆಯುತ್ತಾ ಅಲ್ಲಾಹು ಹೇಳುತ್ತಾನೆ: "ನೀವು ನಿಮ್ಮ ಮನೆಗಳಲ್ಲಿ ತಂಗಿರಿ. ಗತ ಅಜ್ಞಾನ ಕಾಲದ ಸೌಂದರ್ಯ ಪ್ರದರ್ಶ ನವನ್ನು ಮಾಡದಿರಿ. ನಮಾಝುನ್ನು ಸಂಸ್ಥಾಪಿಸಿರಿ ಮತ್ತು ಝಕಾತ್ ನೀಡಿರಿ. ಅಲ್ಲಾಹನು ಮತ್ತು ಅವನ ಸಂದೇಶ ವಾಹಕರನ್ನು ಅನುಸರಿಸಿರಿ. ಓ (ಪ್ರವಾದಿಯ) ಮನೆಯವರೇ! ಅಲ್ಲಾಹನು ಬಯಸುತ್ತಿರುವುದು ನಿಮ್ಮಿಂದ ಮಾಲಿನ್ಯವನ್ನು ನಿವಾರಿಸಲು ಮತ್ತು ನಿಮ್ಮನ್ನು ಸಂಪೂರ್ಣ ಶುದ್ಧೀಕರಿಸಲು ಮಾತ್ರವಾಗಿದ. ನಿಮ್ಮ ಮನೆಗಳಲ್ಲಿ ಓದಿಕೊಡಲಾಗುವ ಅಲ್ಲಾಹನ ಸೂಕ್ತಿಗಳನ್ನು ಮತ್ತು ತತ್ವಜ್ಞಾನವನ್ನು ಸ್ಮರಿಸಿರಿ. ಖಂಡಿತವಾಗಿಯೂ ಅಲ್ಲಾಹನು ಸೂಕ್ಷ್ಮ ಜ್ಞಾನಿಯೂ, ಸರ್ವಜ್ಞನೂ ಆಗಿರುವನು. (ಅಲ್ಲಾಹುವಿಗೆ) ಶರಣಾಗಿರುವ ಪುರುಷರು ಮತ್ತು ಸ್ತ್ರೀಯರು, ವಿಶ್ವಾಸಿಗಳಾಗಿರುವ ಪುರುಷರು ಮತ್ತು ಸ್ತ್ರೀಯರು, ವಿಧೇಯರಾಗಿರುವ ಪುರುಷರು ಮತ್ತು ಸ್ತ್ರೀಯರು, ಸತ್ಯಸಂಧರಾಗಿರುವ ಪುರುಷರು ಮತ್ತು ಸ್ತ್ರೀಯರು, ಸಹನೆ ಪಾಲಿಸುವ ಪುರುಷರು ಮತ್ತು ಸ್ತ್ರೀಯರು, ವಿನಮ್ರರಾಗಿರುವ ಪುರುಷರು ಮತ್ತು ಸ್ತ್ರೀಯರು, ದಾನಧರ್ಮ ಮಾಡುವ ಪುರುಷರು ಮತ್ತು ಸ್ತ್ರೀಯರು, ಉಪವಾಸವನ್ನಾಚರಿಸುವ ಪುರುಷರು ಮತ್ತು ಸ್ತ್ರೀಯರು, ತಮ್ಮ ಗುಪ್ತಾಂಗಗಳನ್ನು ಸಂರಕ್ಷಿಸುವ ಪುರುಷರು ಮತ್ತು ಸ್ತ್ರೀಯರು, ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುವ ಪುರುಷರು ಮತ್ತು ಸ್ತ್ರೀಯರು. ಇವರಿಗ ಅಲ್ಲಾಹನು ಪಾಪಮುಕ್ತಿಯನ್ನು ಮತ್ತು ಮಹಾ ಪ್ರತಿಫಲವನ್ನು ಸಿದ್ಧ ಗೊಳಿಸಿರುವನು. ಅಲ್ಲಾಹನು ಮತ್ತು ಅವನ ಸಂದೇಶವಾಹಕರು ಒಂದು ವಿಷಯವನ್ನು ತೀರ್ಮಾನಿಸಿದ ಬಳಿಕ ಸತ್ಯವಿಶ್ವಾಸಿಗಾಗಲಿ, ಸತ್ಯವಿಶ್ವಾಸಿನಿಗಾಗಲಿ ತಮ್ಮ ವಿಷಯಕ್ಕೆ ಸಂಬಂಧಿಸಿ ಸ್ವತಂತ್ರ ಅಭಿಪ್ರಾಯವಿರುವುದು ಯುಕ್ತವಾದುದಲ್ಲ. ಯಾರು ಅಲ್ಲಾಹನ ಮತ್ತು ಅವನ

ಸಂದೇಶವಾಹಕರನ್ನು, ಕ್ಕರಿಸುವನೋ ಅವನು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವನು." [ಕುರ್‌ಆನ್ 33:33–36]

ಸಭ್ಯ ವಸ್ತ್ರಧಾರಣೆ ಹಾಗೂ ನಡವಳಿಕೆಗೆ ಸಂಬಂಧಿಸಿದಂತೆ ಇಸ್ಲಾಮಿನ ನೀತಿನಿಯಮಗಳು ಇತರ ಕೆಲವು ನಾಗರಿಕತೆಗಳಲ್ಲಿ ಕಂಡು ಬರಬಹುದಾದರೂ ಇಸ್ಲಾಮ್ ಆದೇಶಿಸುವ ವಸ್ತ್ರಧಾರಣೆಯು ಅದ್ವಿತೀಯವೂ ಸುಶೀಲತೆ, ಸದಾಚಾರ ಮತ್ತು ನೈತಿಕ ಮಟ್ಟಗಳಲ್ಲಿ ಮುಸ್ಲಿಮರನ್ನು ಉನ್ನತ ಸ್ಥಾನಕ್ಕೆ ಏರಿಸುವಂತದ್ದೂ ಆಗಿದೆ. ನೈಸರ್ಗಿಕ ಪ್ರಲೋಭನೆಯೆಡೆಗೆ ಕೊಂಡೊಯ್ಯುವ ಅಪಾಯಕಾರಿ ಸನ್ನಿವೇಶಗಳಾದ ಸ್ತ್ರೀ ಪುರುಷರ ಮುಕ್ತ ಬೆರೆಯುವಿಕೆಯಿಂದ ಇಸ್ಲಾಮ್ ವ್ಯಕ್ತಿ ಮತ್ತು ಸಮಾಜವನ್ನು ರಕ್ಷಿಸುತ್ತದೆ.

ಅಧಿಕೃತ ಹದೀಸೊಂದರಲ್ಲಿ ಪ್ರವಾದಿ(ಸ)ರವರು ಹೇಳಿದರು: "ಪ್ರತಿಯೊಂದು ಧರ್ಮಕ್ಕೂ ಒಂದು ವೈಶಿಷ್ಟ್ಯತೆಯಿದೆ. ಇಸ್ಲಾಮಿನ ವೈಶಿಷ್ಟ್ಯತೆಯು ಹಯಾಅ್ (ಸಭ್ಯತೆ, ಲಜ್ಜೆ) ಆಗಿದೆ." [ಇಬ್ನ್ ಮಾಜ].

ರಫೀಕ್ ಮದನಿ ಸಾಸ್ತಾನ "ಸತ್ಯ ಸಾರಥಿ" ಯಿಂದ


ಗೂಢಚಾರಿಯೊರ್ವನು ತನ್ನೆಲ್ಲ ಶತ್ರುಗಳನ್ನು ಸೋಲಿಸ ಬಲ್ಲನು
ವಿಶ್ವಾಸಘಾತಕನು ತನ್ನೆಲ್ಲಾ ಸಮುದಾಯವನ್ನು ವಂಚಿಸಬಲ್ಲನು.
ಸಲಾಹುದ್ದೀನ್ ಅಯ್ಯೂಬಿ.